# ವ್ಯಕ್ತ್ಯತೀತ ಮನೋವಿಜ್ಞಾನ

Transpersonal Psychology

ಇಂದಿರಾ ಜೈಪ್ರಕಾಶ್

ವ್ಯಕ್ತಿಯ ಅನುಭವಗಳನ್ನೂ ಮೀರಿದ ಭೌತಾತಿತ ವಾಸ್ತವತೆಯನ್ನು ಅಭ್ಯಸಿಸುವುದು ವ್ಯಕ್ತ್ಯತೀತ ಮನೋವಿಜ್ಞಾನ. ಆಧ್ಯಾತ್ಮಿಕ ವಿಷಯಗಳು ಮತ್ತು ಮನೋವಿಜ್ಞಾನವನ್ನು ಒಂದುಗೂಡಿಸುವ ಪ್ರಯತ್ನ ಇದು. ಮನೋವಿಜ್ಞಾನದ ಸಂಕಲ್ಪನೆ, ವಿಧಾನಗಳು ಮತ್ತು ಸಿದ್ಧಾಂತಗಳನ್ನು ಆಧ್ಯಾತ್ಮಿಕ ಅಧ್ಯಯನಕ್ಕೆ ಈ ಶಾಖೆ ಅಳವಡಿಸುತ್ತದೆ. ಈ ವಿಷಯದ ಕೇಂದ್ರಬಿಂದು ಸ್ವ-ಅತೀತತೆ(ಸೆಲ್ಫ್ ಟಾನ್ಸೆಂಡನ್ಸ್). ಇದು ಸ್ವ-ಅನನ್ಯತೆಗಿಂತಲೂ ವಿಶಾಲವಾಗಿ ಮಾನವತೆಯನ್ನೇ, ಬ್ರಹ್ಮಾಂಡವನ್ನೇ ಆವರಿಸುವ ಸ್ಥಿತಿ. ಇದಲ್ಲದೆ, ಆಧ್ಯಾತ್ಮಿಕ ಅನುಭವಗಳು, ಚೇತನದ ರಹಸ್ಯಮಯ ಅವಸ್ಥೆಗಳು, ಧ್ಯಾನಾವಸ್ಥೆಗಳು, 'ಶಮನ-ಸ್ಥಿತಿ' , ಕ್ಷುಬ್ಧ ಸ್ಥಿತಿಗಳಾದ ಇಚ್ಛಿತ್ತ, ಖಿನ್ನತೆ ಇವುಗಳನ್ನೂ ಅಭ್ಯಸಿಸುತ್ತದೆ. ಅಸ್ತಿತ್ವವಾದಕ್ಕೆ ಹೋಲಿಕೆ ಇದ್ದರೂ ಆಧ್ಯಾತ್ಮಿಕತೆಯ ಬಗ್ಗೆ ಅಸ್ತಿತ್ವವಾದಿಗಳೊಡನೆ ಭಿನ್ನಾಭಿಪ್ರಾಯಗಳಿವೆ. ಮಾನವತಾವಾದವನ್ನೂ ದಾಟಿದ ಮನೋವಿಜ್ಞಾನದ 'ನಾಲ್ಕನೆಯ ಅಲೆ' ಎಂದೂ ಇದನ್ನು ಕರೆಯುತ್ತಾರೆ. ಇದನ್ನು ಪರಾಮಾನಸ ಮನೋವಿಜ್ಞಾನ ಮತ್ತು ನ್ಯೂ ಏಜ್ ಎಂದು ತಪ್ಪಾಗಿ ಭಾವಿಸುವ ಸಾಧ್ಯತೆ ಇದೆ.

ವ್ಯಕ್ತ್ಯತೀತ ವಿಷಯಗಳ ಬಗ್ಗೆ ವಿಲಿಯಂ ಜೇಮ್ಸ್ ಆಸಕ್ತಿ ಹೊಂದಿದ್ದು ಅವನ ಕೆಲವು ಟಿಪ್ಪಣಿಗಳಲ್ಲಿ ಈ ಪದ ಕಾಣಿಸಿಕೊಂಡಿದೆ. ರೊಬೆರ್ಟೊ ಅಸಗ್ಯೋಲಿ, ಫ್ರಾಯ್ಡ್ , ಯುಂಗ್, ಒಟ್ಟೋ ರ್‍ಯಾಂಕ್, ವಿಕ್ಟರ್ ಫ್ರಾಂಕಲ್ ಮುಂತಾದವರ ಹೆಸರೂ ಕೇಳಿಬರುತ್ತದೆ. 1969 ರಲ್ಲಿ ಅಬ್ರಹಾಂ ಮ್ಯಾಸ್ಲೋ, ಸ್ಟಾನಿಸ್ಲಾವ್ ಗ್ರಾಫ್ ಮತ್ತು ಅಂತೋನಿ ಸುಟಿಚ್ ಮೂವರೂ 'ಜರ್ನಲ್ ಆಫ್ ಟ್ರಾನ್ಸ್ಪರ್ಸನಲ್ ಸೈಕಾಲಜಿ' ಎಂಬ ವಿದ್ವತ್ಪತ್ರಿಕೆ ಹೊರತರಲು ಸಹಕರಿಸಿದರು. 1972 ರಲ್ಲಿ ಈ ವಿಷಯದಲ್ಲಿ ಆಸಕ್ತಿಯಿರುವವರು ತಮ್ಮದೇ ಸಂಸ್ಥೆ ಸ್ಥಾಪಿಸಿದರು. ಸಾಧಾರಣವಾಗಿ ಜೇಮ್ಸ್ ಹಿಲ್‌ಮನ್‌ನ ಪ್ರಾಚೀನರೂಪಗಳ ಅಧ್ಯಯನ, ಅಸಗ್ಯೋಲಿಯ ಸೈಕೋಸಿಂಥೆಸಿಸ್, ರಾಬರ್ಟ್ ಆಂತೋನಿಯ ಝೊನ್ ಟ್ರಾನ್ಸಾಕ್ಶನಲ್ ಸೈಕೋಥೆರಪಿ, ಚಾರ್ಲ್ಸ್ ಟಾರ್ಟ್, ಮ್ಯಾಸ್ಲೋ, ಗ್ರಾಫ್, ಲಿಯರಿ, ವಾಶಬರ್ನ್ , ವಿಲ್ಬರ್ ಮತ್ತು ಯೂಂಗನ ಚಿಂತನೆಗಳನ್ನು ಈ ಶಾಖೆಯಲ್ಲಿ ಸೇರಿಸುತ್ತಾರೆ. ಕೆನ್ ವಿಲ್ಬರ್ ಈ ಕ್ಷೇತ್ರದಲ್ಲಿ ಕೆಲಸಮಾಡಿದ್ದು ನಂತರ ಇದನ್ನು ಬಿಟ್ಟು 'ಅಖಂಡತೆ' (ಇಂಟಗ್ರಲ್) ಉಪಗಮನ ಎಂದು ಬೇರೆ ಅಧ್ಯಯನ ಪ್ರಾರಂಭಿಸಿದ.

ಈ ಅಧ್ಯಯನದಲ್ಲಿ ಅನೇಕ ಮಾದರಿಗಳಿವೆ. ಚೇತನದ ಬಗ್ಗೆ, ಟಿಮೋತಿ ಲಿಯರಿ ಎಂಟು ವರ್ತುಲವಿರುವ ಮಾದರಿ; ವಿಲ್ಬರ್ ಏಣಿಯ ಮೆಟ್ಟಲುಗಳಂತೆ ಹಂತಹಂತವಾಗಿ ವಿಕಾಸ

ಹೊಂದುವ ಚೇತನದ ಮಾದರಿ; ಮೈಖೇಲ್ ವಾಶ್‌ಬರ್ನ್ ಸುರುಳಿ ಆಕಾರದ ಮಾದರಿಗಳನ್ನು ನೀಡಿದ್ದಾರೆ. ವಿಲ್ಬರನ ಪ್ರಕಾರ ವ್ಯಕ್ತಿ ವಿಕಾಸದಲ್ಲಿ ೯ ಹಂತಗಳಿದ್ದು, ಮೊದಲ ೩– ವ್ಯಕ್ತಿಪೂರ್ವ, ನಂತರದ ೩– ವ್ಯಕ್ತಿಗತ ಮತ್ತು ಕೊನೆಯ ೩–ವ್ಯಕ್ತ್ಯತೀತ ಎಂದು ಗುರುತಿಸಲ್ಪಟ್ಟಿವೆ. ಸ್ಟ್ಯಾನಿಸ್ಲಾವ್ ಮತ್ತು ಕ್ರಿಸ್ಟೀನಾ ಗ್ರಾಫ್ "ಆಧ್ಯಾತ್ಮಿಕ ಪ್ರಾದುರ್ಭಾವ" (ವ್ಯಕಿಯೊಳಗಿನ ಆಧ್ಯಾತ್ಮಿಕ ಸುಪ್ತಶಕ್ತಿ ನಿಧಾನವಾಗಿ ಅವನ ಇತರ ಸಮಾಯೋಜನೆಗೆ ಭಂಗತರದೆ ಹೊರಹೊಮ್ಮುವುದು) ಮತ್ತು 'ಆಧ್ಯಾತ್ಮಿಕ ತುರ್ತುಸ್ಥಿತಿ' (ಹೊರಹೊಮ್ಮುವಿಕೆ ತೀವ್ರವಾಗಿ, ವ್ಯಕ್ತಿಯ ನಿಯಂತ್ರಣ ತಪ್ಪಿ ಅವನ ಸಮಾಯೋಜನೆಯನ್ನು ಅಸ್ತವ್ಯಸ್ತಗೊಳಿಸುವುದು) ಎಂಬ ಎರಡು ಸಂಕಲ್ಪನೆಗಳನ್ನು ಮಾನಸಿಕ ಆರೋಗ್ಯ ಕ್ಷೇತ್ರಕ್ಕೆ ನೀಡಿದ್ದಾರೆ. ಮನೋರೋಗಗಳ ನವೀನ ವರ್ಗೀಕರಣದಲ್ಲಿ ಧಾರ್ಮಿಕ ಮತ್ತು ಆಧ್ಯಾತ್ಮಿಕ ಸಮಸ್ಯೆಗಳು ಸೇರಿರುವುದು ಸಾಂಸ್ಕೃತಿಕ ಕಾರಕಗಳ ಬಗ್ಗೆ ಮನೋವೈದ್ಯಕೀಯದಲ್ಲಿ ಸಂವೇದನಾಶೀಲತೆಯ ಸಂಕೇತವಾಗಿದೆ.

ಈ ಶಾಖೆಯಲ್ಲಿ ಹಿಂದು, ಬೌದ್ಧ, ಟಾವೋ, ಶಮನ್, ಕಬಲಾ, ಸೂಫಿ, ಅಮೆರಿಕೆಯ ಮೂಲನಿವಾಸಿಗಳ ಮತ್ತು ಕ್ರಿಶ್ಚಿಯನ್ ಮಿಸ್ಟಿಸಿಸಂಗಳ ಅಧ್ಯಯನ, ಧ್ಯಾನದ ನೈದಾನಿಕ ಅನ್ವಯಿಕತೆ, ಪ್ರಜ್ಞೆಯ ವಿವಿಧ ರೂಪಗಳು, ಭ್ರಾಂತಿಕಾರಕ ಮನಃಸ್ಥಿತಿ, ಚಟಗಳಿಗೆ ಚಿಕಿತ್ಸೆ, ಪೂರ್ವಜನ್ಮ ಚಿಕಿತ್ಸೆ, ಮರಣಸಮೀಪ ಅನುಭವಗಳು, ನಿರ್ದೇಶಿತ ಮನೋಬಿಂಬಗಳು ಮುಂತಾದ ಅನೇಕ ವಿಷಯಗಳಲ್ಲಿ ಅಧ್ಯಯನಗಳು ನಡೆದಿವೆ. ಈ ಶಾಖೆಯಿಂದಾಗಿ ಧಾರ್ಮಿಕತೆಗೆ ಸಂಬಂಧಿಸಿದ ಸಮಸ್ಯೆಗಳು ಮನೋವಿಜ್ಞಾನಿಗಳ ಗಮನಕ್ಕೆ ಬರುತ್ತಿವೆ. ಇವುಗಳಲ್ಲಿ ಕೆಲವು–ಮತಾಂತರ, ಹೊಸ ಧಾರ್ಮಿಕ ಆಚರಣೆಗಳು, ಶ್ರದ್ಧೆ ಕಳೆದುಕೊಳ್ಳುವುದು, 'ಕಲ್ಟ್' ಗಳಿಂದ ಹೊರಬಂದವರ ಮರುಹೊಂದಾಣಿಕೆ ಮುಂತಾದವು. ಮುಖ್ಯವಾಹಿನಿ ಅಧ್ಯಯನಕ್ಕೆ ಒಳಪಡದ ಕುಂಡಲಿನಿ, ಶಮನ್ ವಿಷಮಸ್ಥಿತಿ, ಮರಣಸಮೀಪ ಅನುಭವ, ಧ್ಯಾನಕ್ಕೆ ಸಂಬಂಧಿಸಿದ ಸಮಸ್ಯೆಗಳು, ಭೂತ ಆವಾಹನೆ, ಪೂರ್ವಜನ್ಮ ಸ್ಮೃತಿ ಮುಂತಾದವು ಈಗ ಪರಿಶೀಲಿಸಲ್ಪಡುತ್ತಿವೆ. ವಿಲಿಯಂ ಬ್ಯಾರಿ ಟ್ರಾನ್ಸ್‌ಫರ್ಮೇಶನಲ್ ಕ್ವಾಲಿಟಿ ಥಿಯರಿ ಎಂದು ಶಿಕ್ಷಣ ಕ್ಷೇತ್ರದಲ್ಲಿ ಉಪಯೊಗಿಸಬಹುದಾದ ಸಂಶೋಧನಾ ಮಾದರಿಯನ್ನು ನೀಡಿದ್ದಾನೆ.

ಈ ಶಾಖೆಯ ಬಗ್ಗೆ ಅನೇಕ ಟೀಕೆಗಳಿವೆ. ಇಲ್ಲಿನ ಅನೇಕ ವಿಷಯಗಳು (ಉದಾ: ಅಸ್ತಿತ್ವ, ಸ್ವಯಂವಿಸ್ತರಣೆ, ಚೇತನ) ಬೇರೆ ಶಾಖೆಗಳಲ್ಲಿ ಸೇರಿದ್ದು ಇನ್ನೊಂದು ಶಾಖೆಯ ಅಗತ್ಯವಿದೆಯೇ ಎಂಬ ಮೂಲಭೂತ ಪ್ರಶ್ನೆ ಇದೆ. ತತ್ವಶಾಸ್ತ್ರಜ್ಞರು ಸಂಕಲ್ಪನೆಗಳ ಅಸ್ಪಷ್ಟತೆಯ ಬಗ್ಗೆ, ಭೌತವಿಜ್ಞಾನಿಗಳು ಭೌತಿಕ ತತ್ವಗಳ ಅಸಮಂಜಸ ಉಪಯೋಗದ ಬಗ್ಗೆ, ಮನೋವಿಜ್ಞಾನಿಗಳು ವಸ್ತುನಿಷ್ಠತೆ ಇಲ್ಲದ ಬಗ್ಗೆ, ಜೀವವಿಜ್ಞಾನಿಗಳು ದೈಹಿಕ ಕಾರಕಗಳನ್ನು ನಿರ್ಲಕ್ಷಿಸಿರುವ ಬಗ್ಗೆ ಆಕ್ಷೇಪಣೆಗಳನ್ನು ಮಾಡಿದ್ದಾರೆ. ಧರ್ಮ ಮತ್ತು ಆಧ್ಯಾತ್ಮಿಕತೆಗಳ ನಡುವೆ ಗೊಂದಲ ಇರುವುದು ಸಾಮಾನ್ಯ. ಇಂತಹ ವಿವಾದಾತ್ಮಕ ವಿಷಯಗಳನ್ನು ಪರಿಹರಿಸಿ ಮುಖ್ಯವಾಹಿನಿಯೊಳಗೆ ಈ ಕ್ಷೇತ್ರದ ಪ್ರಾಬಲ್ಯ ಹೆಚ್ಚಿಸುವ ಕೆಲಸ ನಡೆದಿದೆ.